ಸೂ. 28 | **71. ನೂಹ್** | ರು. 2

آياتها ٢٨ سُورَةُ نُوحٍ مَكِّيَّةٌ ركوعاتها ٢

(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللَّهِ الرَّحْمَٰنِ الرَّحِيمِ

1. ನಾವು ನೂಹರನ್ನು ಅವರ ಜನಾಂಗದ ಕಡೆಗೆ ರವಾನಿಸಿದೆವು. ಅವರು ತಮ್ಮ ಜನಾಂಗದವರಿಗೆ- ಅವರ ಮೇಲೆ ಒಂದು ವೇದನಾಯುಕ್ತ ಯಾತನೆ ಬಂದೆರಗುವುದಕ್ಕೆ ಮುಂಚೆಯೇ- ಎಚ್ಚರಿಕೆ ನೀಡಲೆಂದು.

إِنَّا أَرْسَلْنَا نُوحًا إِلَىٰ قَوْمِهِ أَنْ أَنذِرْ قَوْمَكَ مِن قَبْلِ أَن يَأْتِيَهُمْ عَذَابٌ أَلِيمٌ ①

2. ಅವರು ಹೇಳಿದರು; "ನನ್ನ ಜನಾಂಗದವರೇ, ನಾನು ನಿಮಗಾಗಿ ಓರ್ವ ಸುಸ್ಪಷ್ಟ ಎಚ್ಚರಿಕೆ ಕೊಡುವವ(ಸಂದೇಶವಾಹಕ)ನಾಗಿದ್ದೇನೆ.

قَالَ يَا قَوْمِ إِنِّي لَكُمْ نَذِيرٌ مُّبِينٌ ②

3. ಅಲ್ಲಾಹನ ಆರಾಧನೆ ಮಾಡಿರಿ, ಅವನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

أَنِ اعْبُدُوا اللَّهَ وَاتَّقُوهُ وَأَطِيعُونِ ③

4. ಅಲ್ಲಾಹನು ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ನಿಮ್ಮನ್ನು ಒಂದು ನಿಶ್ಚಿತ ಕಾಲದ ವರೆಗೆ ಉಳಿಸುವನು.[1] ವಾಸ್ತವದಲ್ಲಿ ಅಲ್ಲಾಹನು ನಿಶ್ಚಯಿಸಿರುವ ಕಾಲವು ಬಂದು ಬಿಟ್ಟರೆ ಮತ್ತೆ ಅದನ್ನು ಮುಂದೂಡಲಾಗುವುದಿಲ್ಲ.[2] ಅಯ್ಯೋ ನಿಮಗಿದು ತಿಳಿದಿರುತ್ತಿದ್ದರೆ!"

يَغْفِرْ لَكُم مِّن ذُنُوبِكُمْ وَيُؤَخِّرْكُمْ إِلَىٰ أَجَلٍ مُّسَمًّى ۚ إِنَّ أَجَلَ اللَّهِ إِذَا جَاءَ لَا يُؤَخَّرُ ۖ لَوْ كُنتُمْ تَعْلَمُونَ ④

5. ಅವರು[3] ಹೀಗೆ ಬಿನ್ನವಿಸಿದರು- "ನನ್ನ ಪ್ರಭೂ, ನಾನು ನನ್ನ ಜನಾಂಗದವರನ್ನು ಹಗಲಿರುಳೆನ್ನದೆ ಕರೆದೆನು.

قَالَ رَبِّ إِنِّي دَعَوْتُ قَوْمِي لَيْلًا وَنَهَارًا ⑤

---

1. ಅರ್ಥಾತ್- ನೀವು ಈ ಮೂರು ವಿಷಯಗಳನ್ನು ಸಮ್ಮತಿಸಿದರೆ ಅಲ್ಲಾಹನು ನಿಗದಿಪಡಿಸಿರುವ ನೈಸರ್ಗಿಕ ಮರಣದ ತನಕದ ಅವಧಿಯಲ್ಲಿ ನಿಮಗೆ ಜೀವಿಸುವ ಅವಕಾಶ ನೀಡಲಾಗುವುದು.
2. ಇಲ್ಲಿ ಎರಡನೆಯ ಬಾರಿ ಪ್ರಸ್ತಾಪಿಸಲಾಗಿರುವ 'ಕಾಲ'ವೆಂದರೆ ಅಲ್ಲಾಹನು ಯಾವುದೇ ಜನಾಂಗದ ಮೇಲೆ ಯಾತನೆ ಎರಗಿಸಲು ನಿಗದಿಪಡಿಸಿರುವ ಕಾಲ. ಯಾವುದೇ ಜನಾಂಗದ ಮೇಲೆ ಯಾತನೆ ಎರಗಿಸುವ ತೀರ್ಮಾನವಾಗಿ ಬಿಟ್ಟರೆ ನಂತರ ಅವರು ವಿಶ್ವಾಸ ಸ್ವೀಕರಿಸಿದರೂ ಅವರನ್ನು ಕ್ಷಮಿಸಲಾಗುವುದಿಲ್ಲ ಎಂಬ ವಿಷಯವನ್ನು ಪವಿತ್ರ ಕುರ್‌ಆನಿನ ವಿವಿಧೆಡೆಗಳಲ್ಲಿ ಅತ್ಯಂತ ಸ್ಪಷ್ಟವಾಗಿ ಸಾರಲಾಗಿದೆ.
3. ನಡುವೆ ಸುದೀರ್ಘ ಕಾಲದ ಇತಿಹಾಸವನ್ನು ಬಿಟ್ಟು ಹ. ನೂಹ್(ಅ) ತಮ್ಮ ಪ್ರವಾದಿತ್ವದ ಕೊನೆಯ ಘಟ್ಟದಲ್ಲಿ ಅಲ್ಲಾಹನ ಮುಂದಿಟ್ಟ ಮನವಿಯನ್ನು ಇಲ್ಲಿ ಪ್ರಸ್ತಾಪಿಸಲಾಗುತ್ತಿದೆ.

6. ಆದರೆ ನನ್ನ ಕರೆಯು ಅವರ ಪಲಾಯನವನ್ನು ಮಾತ್ರ ಹೆಚ್ಚಿಸಿತು.

فَلَمْ يَزِدْهُمْ دُعَآءِيْٓ اِلَّا فِرَارًا ﴿٦﴾

7. ನೀನು ಅವರನ್ನು ಕ್ಷಮಿಸುವಂತಾಗಲೆಂದು ನಾನು ಅವರನ್ನು ಕರೆದಾಗಲೆಲ್ಲ ಅವರು ಕಿವಿಗಳಲ್ಲಿ ಬೆರಳುಗಳನ್ನು ತುರುಕಿಸಿ ಕೊಂಡರು, ತಮ್ಮ ವಸ್ತ್ರಗಳಿಂದ ಮುಖಮುಚ್ಚಿ ಕೊಂಡರು,[4] ಹಠಮಾರಿತನ ತೋರಿದರು ಮತ್ತು ಭಾರೀ ಅಹಂಭಾವ ತೋರಿಸಿದರು.

وَاِنِّيْ كُلَّمَا دَعَوْتُهُمْ لِتَغْفِرَ لَهُمْ جَعَلُوْٓا اَصَابِعَهُمْ فِيْٓ اٰذَانِهِمْ وَاسْتَغْشَوْا ثِيَابَهُمْ وَاَصَرُّوْا وَاسْتَكْبَرُوا اسْتِكْبَارًا ﴿٧﴾

8. ತರುವಾಯ ನಾನು ಅವರಿಗೆ ಬಹಿರಂಗವಾಗಿ ಕರೆ ಕೊಟ್ಟೆನು,

ثُمَّ اِنِّيْ دَعَوْتُهُمْ جِهَارًا ﴿٨﴾

9. ಅನಂತರ ನಾನು ಘಂಟಾಘೋಷವಾಗಿ ಧರ್ಮಾಹ್ವಾನ ನೀಡಿದೆನು ಮತ್ತು ರಹಸ್ಯವಾಗಿಯೂ ಸಮಜಾಯಿಸಿದೆನು-

ثُمَّ اِنِّيْٓ اَعْلَنْتُ لَهُمْ وَاَسْرَرْتُ لَهُمْ اِسْرَارًا ﴿٩﴾

10. ನಾನು (ಹೀಗೆ) ಹೇಳಿದೆನು: ನಿಮ್ಮ ಪ್ರಭುವಿನೊಡನೆ ಕ್ಷಮಾಯಾಚನೆ ಮಾಡಿರಿ. ಖಂಡಿತವಾಗಿಯೂ ಅವನು ಮಹಾಕ್ಷಮಾಶೀಲನಾಗಿದ್ದಾನೆ-

فَقُلْتُ اسْتَغْفِرُوْا رَبَّكُمْ ۗ اِنَّهٗ كَانَ غَفَّارًا ﴿١٠﴾

11. ಅವನು ನಿಮ್ಮ ಮೇಲೆ ಆಕಾಶದಿಂದ ಧಾರಾಳವಾಗಿ ಮಳೆ ಸುರಿಸುವನು,

يُّرْسِلِ السَّمَآءَ عَلَيْكُمْ مِّدْرَارًا ﴿١١﴾

12. ನಿಮಗೆ ಸೊತ್ತು ಸಂತಾನಗಳನ್ನು ದಯಪಾಲಿಸುವನು, ನಿಮಗಾಗಿ ಉದ್ಯಾನಗಳನ್ನು ಸೃಷ್ಟಿಸುವನು ಮತ್ತು ನಿಮಗಾಗಿ ಕಾಲುವೆಗಳನ್ನು ಹರಿಸುವನು.

وَّيُمْدِدْكُمْ بِاَمْوَالٍ وَّبَنِيْنَ وَيَجْعَلْ لَّكُمْ جَنّٰتٍ وَّيَجْعَلْ لَّكُمْ اَنْهٰرًا ﴿١٢﴾

13. ನೀವು ಅಲ್ಲಾಹನ ಬಗ್ಗೆ ಯಾವುದೇ ಪ್ರತಿಷ್ಠೆಯನ್ನು ನಿರೀಕ್ಷಿಸದಿರಲು, ನಿಮಗೇನಾಗಿದೆ?[5]

مَا لَكُمْ لَا تَرْجُوْنَ لِلّٰهِ وَقَارًا ﴿١٣﴾

---

4. ಅವರಿಗೆ ಹ. ನೂಹ್‌ರ(ಅ) ಮಾತು ಕೇಳುವುದಂತಿರಲಿ, ಅವರ ಮುಖ ನೋಡುವುದೂ ಇಷ್ಟವಿರಲಿಲ್ಲ ಎಂಬ ಕಾರಣಕ್ಕಾಗಿ ಅವರು ಮುಖ ಮುಚ್ಚಿಕೊಳ್ಳುತ್ತಿರಬಹುದು ಅಥವಾ ಅವರ ಮುಂದಿನಿಂದ ಮುಖ ಮರೆಸಿಕೊಂಡು ಹೊರಟು ಹೋಗಿರಬೇಕು. ಹೀಗೆ ಅವರು ನಮ್ಮ ಗುರುತು ಹಿಡಿದು ಮಾತನಾಡುವ ಪ್ರಮೇಯವೇ ಎದುರಾಗಬಾರದು ಎಂಬ ಉದ್ದೇಶದಿಂದ ಅವರು ಇಂತಹ ಕೆಲಸ ಮಾಡುತ್ತಿದ್ದಿರಬಹುದು.

5. ಲೋಕದ ಸಣ್ಣ ಸಣ್ಣ ಸರದಾರರು ಮತ್ತು ಧನಿಕರ ಬಗ್ಗೆಯೂ ಅವರ ಘನತೆಗೆ ವಿರುದ್ಧವಾದ ಯಾವುದೇ ಕೆಲಸ ಮಾಡುವುದು ಅಪಾಯಕರವೆಂದು ನೀವು ಭಾವಿಸುತ್ತೀರಿ. ಆದರೆ ಲೋಕದೊಡೆಯನೂ ಅತ್ಯಂತ ಘನತರವಾದ ಅಸ್ತಿತ್ವವನ್ನು ಹೊಂದಿದ್ದಾನೆಂದು ನೀವು ಕಲ್ಪಿಸುವುದಿಲ್ಲ. ಅವನ ವಿರುದ್ಧ ನೀವು ಬಂಡಾಯವೆಸಗುತ್ತೀರಿ. ಅವನ ದೇವತ್ವದಲ್ಲಿ ಇತರರನ್ನು ಭಾಗೀದಾರರನ್ನಾಗಿ ನಿಶ್ಚಯಿಸುತ್ತೀರಿ. ಅವನ ಆದೇಶಗಳನ್ನು ಉಲ್ಲಂಘಿಸುತ್ತೀರಿ. ಇದರಿಂದ ದೇವನು ನಿಮ್ಮನ್ನು ಶಿಕ್ಷಿಸಬಹುದೆಂಬ ಶಂಕೆಯೂ ನಿಮ್ಮನ್ನು ಕಾಡುವುದಿಲ್ಲ.

14. ಅವನಂತು ನಿಮ್ಮನ್ನು ವಿವಿಧ ಹಂತಗಳಲ್ಲಿ ಸೃಷ್ಟಿಸಿರುವನು.[6]

وَقَدْ خَلَقَكُمْ أَطْوَارًا ﴿١٤﴾

15. ಅಲ್ಲಾಹನು ಸಪ್ತಗಗನಗಳನ್ನು ಅಂತಸ್ತು ಅಂತಸ್ತುಗಳಾಗಿ ಹೇಗೆ ಸೃಷ್ಟಿಸಿದನು ಎಂಬುದನ್ನು-

أَلَمْ تَرَوْا كَيْفَ خَلَقَ اللَّهُ سَبْعَ سَمَاوَاتٍ طِبَاقًا ﴿١٥﴾

16. ಮತ್ತು ಅವುಗಳಲ್ಲಿ ಚಂದ್ರನನ್ನು ಬೆಳಕಾಗಿಯೂ ಸೂರ್ಯನನ್ನು ದೀಪವಾಗಿಯೂ ಮಾಡಿರುವನೆಂಬುದನ್ನು.

وَجَعَلَ الْقَمَرَ فِيهِنَّ نُورًا وَجَعَلَ الشَّمْسَ سِرَاجًا ﴿١٦﴾

17. ಅಲ್ಲಾಹನು ನಿಮ್ಮನ್ನು ಭೂಮಿಯಿಂದ ವಿಚಿತ್ರ ರೀತಿಯಲ್ಲಿ ಬೆಳೆಸಿದನು-[7]

وَاللَّهُ أَنْبَتَكُمْ مِنَ الْأَرْضِ نَبَاتًا ﴿١٧﴾

18. ಮುಂದೆ ಅವನು ನಿಮ್ಮನ್ನು ಪುನಃ ಇದೇ ಭೂಮಿಗೆ ಮರಳಿಸುವನು ಮತ್ತು ಇದರಿಂದ ಒಮ್ಮೆಲೇ ನಿಮ್ಮನ್ನು ಹೊರತೆಗೆಯುವನು.

ثُمَّ يُعِيدُكُمْ فِيهَا وَيُخْرِجُكُمْ إِخْرَاجًا ﴿١٨﴾

19. ಮತ್ತು ಅಲ್ಲಾಹನು ಭೂಮಿಯನ್ನು ನಿಮಗಾಗಿ ಹಾಸುಗೆಯನ್ನಾಗಿ ಮಾಡಿದನು-

وَاللَّهُ جَعَلَ لَكُمُ الْأَرْضَ بِسَاطًا ﴿١٩﴾

20. ನೀವು ಇದರಲ್ಲಿ ವಿಶಾಲವಾದ ಮಾರ್ಗಗಳಲ್ಲಿ ನಡೆಯುವಂತಾಗಲು."

لِتَسْلُكُوا مِنْهَا سُبُلًا فِجَاجًا ﴿٢٠﴾ ع ۲ ۹

21. ನೂಹರು ಹೇಳಿದರು- "ನನ್ನ ಪ್ರಭೂ, ಇವರು ನನ್ನ ಮಾತನ್ನು ತಿರಸ್ಕರಿಸಿದರು ಮತ್ತು ಸಂಪತ್ತು ಹಾಗೂ ಸಂತಾನಗಳನ್ನು ಪಡೆದು ಇನ್ನಷ್ಟು ನಷ್ಟಕ್ಕೊಳಗಾಗಿರುವವರನ್ನು (ಸರದಾರರನ್ನು) ಅನುಸರಿಸಿದರು.

قَالَ نُوحٌ رَبِّ إِنَّهُمْ عَصَوْنِي وَاتَّبَعُوا مَنْ لَمْ يَزِدْهُ مَالُهُ وَوَلَدُهُ إِلَّا خَسَارًا ﴿٢١﴾

22. ಇವರು ಬಹುದೊಡ್ಡ ಮೋಸದ ಜಾಲವನ್ನು ಹರಡಿಟ್ಟಿದ್ದಾರೆ.

وَمَكَرُوا مَكْرًا كُبَّارًا ﴿٢٢﴾

23. ಇವರು, "ಎಷ್ಟು ಮಾತ್ರಕ್ಕೂ ನಿಮ್ಮ ಆರಾಧ್ಯರನ್ನು ತ್ಯಜಿಸಬೇಡಿರಿ. ವದ್ದ್, ಸುವಾಅ್, ಯಗೂಸ್, ಯಊಕ್ ಮತ್ತು ನಸ್ರ್‌ಗಳನ್ನು ಬಿಡಬೇಡಿರಿ"- ಎಂದು ಹೇಳಿದರು.[8]

وَقَالُوا لَا تَذَرُنَّ آلِهَتَكُمْ وَلَا تَذَرُنَّ وَدًّا وَلَا سُوَاعًا وَلَا يَغُوثَ وَيَعُوقَ وَنَسْرًا ﴿٢٣﴾

6. ಅರ್ಥಾತ್- ಸೃಷ್ಟಿಯ ವಿವಿಧ ಹಂತ ಮತ್ತು ಸ್ವರೂಪಗಳ ಮೂಲಕ ದಾಟಿಸಿ ನಿಮ್ಮನ್ನು ಈಗಿನ ಸ್ಥಿತಿಗೆ ತಂದಿದ್ದಾನೆ.

7. ಇಲ್ಲಿ ಭೂಮಿಯ ಅಂಶಗಳಿಂದ ಮಾನವನನ್ನು ಸೃಷ್ಟಿಸಿರುವುದನ್ನು ಸಸ್ಯಗಳ ಉಗಮಕ್ಕೆ ಹೋಲಿಸಲಾಗಿದೆ. ಯಾವ ರೀತಿ ಸಸ್ಯಗಳೇ ಇಲ್ಲದಿದ್ದ ಈ ಭೂಮುಖದಲ್ಲಿ ಅಲ್ಲಾಹನು ಅದನ್ನು ಬೆಳೆಸಿದನೋ ಅದೇ ರೀತಿ ಭೂಮಿಯಲ್ಲಿ ಮಾನವ ಅಸ್ತಿತ್ವವೇ ಇಲ್ಲದಿದ್ದ ಒಂದು ಕಾಲವಿತ್ತು. ಅನಂತರ ಅಲ್ಲಾಹನು ಇಲ್ಲಿ ಮಾನವನ ಕೃಷಿ ಮಾಡಿದನು.

8. ಇಲ್ಲಿ ನೂಹ್‌ರ(ಅ) ಸಮುದಾಯದ ಆರಾಧ್ಯರುಗಳ ಪೈಕಿ, ತದನಂತರ ಅರೇಬಿಯಾದ ನಿವಾಸಿಗಳೂ ಪೂಜಿಸಲಾರಂಭಿಸಿದ್ದ ಆರಾಧ್ಯರುಗಳ ಹೆಸರೆತ್ತಲಾಗಿದೆ. ಇಸ್ಲಾಮಿನ ಆರಂಭದ ವೇಳೆ ಅಲ್ಲಲ್ಲಿ ಅವುಗಳ ಮಂದಿರಗಳಿದ್ದುವು.

24. ಇವರು ಅನೇಕ ಮಂದಿಯನ್ನು ದಾರಿಗೆಡಿಸಿದ್ದಾರೆ ಮತ್ತು ನೀನೂ ಈ ಅಕ್ರಮಿಗಳಿಗೆ ಪಥಭ್ರಷ್ಟತೆಯ ವಿನಾ ಇನ್ನಾವ ವಿಷಯ ದಲ್ಲಿಯೂ ಅಭಿವೃದ್ಧಿ ನೀಡಬೇಡ."[9]

وَقَدْ أَضَلُّوا كَثِيرًا ۖ وَلَا تَزِدِ الظَّالِمِينَ إِلَّا ضَلَالًا ﴿٢٤﴾

25. ತಮ್ಮ ಅಪರಾಧಗಳ ಕಾರಣದಿಂದಾಗಿಯೇ ಅವರು ಮುಳುಗಿಸಲ್ಪಟ್ಟರು ಮತ್ತು ಅಗ್ನಿಗೆ ತಳ್ಳಲ್ಪಟ್ಟರು. ಅನಂತರ ಅವರಿಗೆ, ತಮ್ಮನ್ನು ಅಲ್ಲಾಹನಿಂದ ರಕ್ಷಿಸಬಲ್ಲ ಸಹಾಯಕನಾರೂ ಸಿಗಲಿಲ್ಲ.

مِّمَّا خَطِيئَاتِهِمْ أُغْرِقُوا فَأُدْخِلُوا نَارًا فَلَمْ يَجِدُوا لَهُم مِّن دُونِ اللَّهِ أَنصَارًا ﴿٢٥﴾

26. ಮತ್ತು ನೂಹರು ಹೀಗೆಂದರು- "ನನ್ನ ಪ್ರಭೂ, ಈ ಸತ್ಯನಿಷೇಧಿಗಳ ಪೈಕಿ ಯಾರನ್ನೂ ಭೂಮಿಯ ಮೇಲೆ ನೆಲೆಸಲು ಬಿಡಬೇಡ.

وَقَالَ نُوحٌ رَّبِّ لَا تَذَرْ عَلَى الْأَرْضِ مِنَ الْكَافِرِينَ دَيَّارًا ﴿٢٦﴾

27. ನೀನು ಇವರನ್ನು ಹಾಗೆ ಬಿಟ್ಟರೆ, ಇವರು ನಿನ್ನ ದಾಸರನ್ನು ದಾರಿಗೆಡಿಸುವರು. ಇವರ ಸಂತತಿಯಲ್ಲಿ ಹುಟ್ಟುವ ಪ್ರತಿಯೊಬ್ಬನೂ ದುರಾಚಾರಿ ಮತ್ತು ಘೋರ ಸತ್ಯನಿಷೇಧಿಯೇ ಆಗುವನು.

إِنَّكَ إِن تَذَرْهُمْ يُضِلُّوا عِبَادَكَ وَلَا يَلِدُوا إِلَّا فَاجِرًا كَفَّارًا ﴿٢٧﴾

28. ನನ್ನ ಪ್ರಭೂ, ನನ್ನನ್ನು, ನನ್ನ ಮಾತಾಪಿತರನ್ನು, ಸತ್ಯವಿಶ್ವಾಸಿಯಾಗಿ ನನ್ನ ಮನೆಗೆ ಪ್ರವೇಶಿಸಿದ ಪ್ರತಿಯೊಬ್ಬನನ್ನು ಮತ್ತು ಎಲ್ಲ ಸತ್ಯ ವಿಶ್ವಾಸಿ ಸ್ತ್ರೀ-ಪುರುಷರನ್ನು ಕ್ಷಮಿಸಿಬಿಡು ಮತ್ತು ಅಕ್ರಮಿಗಳಿಗೆ ವಿನಾಶದ ಹೊರತು ಇನ್ನೇನನ್ನೂ ವೃದ್ಧಿಸಬೇಡ".

رَّبِّ اغْفِرْ لِي وَلِوَالِدَيَّ وَلِمَن دَخَلَ بَيْتِيَ مُؤْمِنًا وَلِلْمُؤْمِنِينَ وَالْمُؤْمِنَاتِ وَلَا تَزِدِ الظَّالِمِينَ إِلَّا تَبَارًا ﴿٢٨﴾

---

9. ಹ. ನೂಹ್(ಅ) ಅಸಹನೆಯಿಂದ ಈ ಶಾಪ ಹಾಕಿರಲಿಲ್ಲ. ನೂರಾರು ವರ್ಷಗಳ ಕಾಲ ಸಂದೇಶ ಪ್ರಚಾರ ಮಾಡಿ ತಮ್ಮ ಸಮುದಾಯದಿಂದ ಸಂಪೂರ್ಣ ಬೇಸತ್ತು ಹೋದ ಬಳಿಕ ಅವರ ಬಾಯಿಯಿಂದ ಈ ಶಾಪ ಹೊರಟಿತ್ತು.